ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ಕಲ್ಯಾಣ ಕರ್ನಾಟಕ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ FDA ಹುದ್ದೆಗಳ ಬಗ್ಗೆ

ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ) -

172 (1412) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಕಲ್ಯಾಣ ಕರ್ನಾಟಕದ ಜಿಲ್ಲೆಗಳಲ್ಲಿ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ, ಎಷ್ಟು ಪ್ರಥಮ ದರ್ಜೆ ಸಹಾಯಕ ಹುದ್ದೆಗಳು ಎಷ್ಟು ವರ್ಷಗಳಿಂದ ಖಾಲಿ ಇವೆ ; (ಜಿಲ್ಲಾವಾರು ಮಾಹಿತಿ ನೀಡುವುದು)

(ಆ) ಸದರಿ ಎಫ್.ಡಿ.ಎ. ಹುದ್ದೆಗಳ ನೇಮಕಾತಿಗೆ ಸಂಬಂಧಿಸಿದಂತೆ ಕೆ.ಪಿ.ಎಸ್.ಸಿ.ಗೆ ಪ್ರಸ್ತಾವನೆ ಸಲ್ಲಿಸಲಾಗಿದೆಯೇ ; ಇದ್ದಲ್ಲಿ, ಯಾವ ದಿನಾಂಕಗಳಂದು ಸಲ್ಲಿಸಲಾಗಿದೆ; ಇಲ್ಲದಿದ್ದಲ್ಲಿ, ಸಲ್ಲಿಸದಿರಲು ಕಾರಣಗಳೇನು ; (ಸಂಪೂರ್ಣ ವಿವರ ನೀಡುವುದು)

(ಇ) ಕೆ.ಪಿ.ಎಸ್.ಸಿ. ವತಿಯಿಂದ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ, ಕಲ್ಯಾಣ ಕರ್ನಾಟಕ ಜಿಲ್ಲೆಗಳಲ್ಲಿ ಇತ್ತೀಚಿನ ಯಾವ ವರ್ಷದಲ್ಲಿ ಎಷ್ಟು ಎಫ್.ಡಿ.ಎ. ಹುದ್ದೆಗಳನ್ನು ಭರ್ತಿ ಮಾಡಲಾಗಿದೆ ; (ಜಿಲ್ಲಾವಾರು ವಿವರ ನೀಡುವುದು)

(ಈ) ಸರ್ಕಾರದ ವಿಳಂಬ ನೀತಿಯಿಂದ ಎಫ್.ಡಿ.ಎ. ಹುದ್ದೆಗಳ ನೇಮಕಾತಿಯಿಂದ ಆ ಭಾಗದ ಅರ್ಹ ನಿರುದ್ಯೋಗಿ ಅಭ್ಯರ್ಥಿಗಳಿಗೆ ಅನ್ಯಾಯವಾಗುತ್ತಿಲ್ಲವೇ ಮತ್ತು ಇದರಿಂದ ಆ ಭಾಗದ ಆಡಳಿತದ ನಿತ್ಯ ಚಟುವಟಿಕೆಗಳನ್ನು ನಿರ್ವಹಿಸುವಲ್ಲಿ ತೊಂದರೆಯಾಗುತ್ತಿಲ್ಲವೇ ; ಸರಿಪಡಿಸಲು ಕೈಗೊಂಡ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು)

(ಉ) ಖಾಲಿ ಇರುವ ಎಫ್.ಡಿ.ಎ. ಹುದ್ದೆಗಳನ್ನು ಯಾವ ನಿಗಧಿತ ಅವಧಿಯಲ್ಲಿ ನೇರ ನೇಮಕಾತಿ ಮಾಡಿಕೊಳ್ಳುವ ಮೂಲಕ ಅರ್ಹ ಉದ್ಯೋಗಾಕಾಂಕ್ಷಿಗಳಿಗೆ ನ್ಯಾಯ ಒದಗಿಸಲಾಗುವುದು ? (ಸಂಪೂರ್ಣ ವಿವರ ನೀಡುವುದು)